# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1597 (1738)

2) ಸದಸ್ಯರ ಹೆಸರು : ಶ್ರೀ ಎಸ್. ನಾಗರಾಜ್ (ಸಂದೇಶ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

3) ಉತ್ತರಿಸುವ ದಿನಾಂಕ : 22-03-2021

4) ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬಿ.ಆರ್.ಟಿ. (ಬಿಳಿಗಿರಿರಂಗನ ಬೆಟ್ಟ) ಅಭಯಾರಣ್ಯದ ಬೈಲೂರು ವನ್ಯಜೀವಿ ವಿಭಾಗದಲ್ಲಿ ನೂರಾರು ಎಕರೆಯಲ್ಲಿ ಬೆಳೆದಿರುವ ಬಿದಿರು ಒಣಗಿ, ಬಿದಿರಕ್ಕಿ ಬಿಟ್ಟು, ಅವಸಾನವಾಗುತ್ತಿರುವುದು ಇಲಾಖೆಯ ಗಮನಕ್ಕೆ ಬಂದಿದೆಯೇ; ಒಣಗಿಹೋಗುವ ಈ ಬಿದಿರಿಗೆ ಪರ್ಯಾಯವಾಗಿ ಹೊಸದಾಗಿ ಬಿದಿರನ್ನು ಬಿತ್ತನೆ ಮಾಡಿ ಬೆಳೆಸಲು ಕ್ರಮ ತೆಗೆದುಕೊಳ್ಳಲಾಗಿದೆಯೇ; | ಬಂದಿದೆ.<br><br>ಒಣಗಿ ಹೋಗಿರುವ ಬಿದಿರಿಗೆ ಬದಲಾಗಿ ಪರ್ಯಾಯವಾಗಿ ಹೊಸದಾಗಿ ಬಿದಿರು ಬಿತ್ತನೆ ಮಾಡಲು ಬಿದಿರು ಬೀಜವನ್ನು ಸಂಗ್ರಹಣೆ ಮಾಡಲಾಗುತ್ತಿದೆ. ಮುಂದಿನ ಮಳೆಗಾಲದಲ್ಲಿ ಬಿದಿರು ಬೀಜವನ್ನು ಬಿತ್ತನೆ ಮಾಡಿ ಬಿದಿರು ಬೆಳೆಸಲು ಕ್ರಮಕೈಗೊಳ್ಳಲಾಗುವುದು. |
| ಆ) | ಆನೆಗಳ ಪ್ರಮುಖ ಆಹಾರವಾಗಿರುವ ಈ ಬಿದಿರನ್ನು ಹೆಚ್ಚು ಪ್ರದೇಶದಲ್ಲಿ ಬೆಳೆಸಲು ಕ್ರಮ ಜರುಗಿಸಲಾಗುವುದೇ; | ಬಿ.ಆರ್.ಟಿ. (ಬಿಳಿಗಿರಿರಂಗನ ಬೆಟ್ಟ) ಹುಲಿ ಸಂರಕ್ಷಿತ ಪ್ರದೇಶದ ಸೂಕ್ತ ಅರಣ್ಯ ಪ್ರದೇಶಗಳಲ್ಲಿ ಬಿದಿರು ಬೆಳೆಸಲು ಕ್ರಮ ಕೈಗೊಳ್ಳಲಾಗುವುದು. |
| ಇ) | ಒಣಗಿ ನಿಂತಿರುವ ಬಿದಿರಿಗೆ ಮುಂದಿನ ಬೇಸಿಗೆ ದಿನಗಳಲ್ಲಿ ಬೆಂಕಿ ಬಿದ್ದು ಅರಣ್ಯಕ್ಕೆ ಅಪಾಯ ಸಂಭವಿಸಬಹುದಾದ ಸ್ಥಿತಿ ಇರುವುದರಿಂದ ಬೆಂಕಿ ಬೀಳದಂತೆ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಳ್ಳಲಾಗುವುದೇ? | ಒಣಗಿ ನಿಂತಿರುವ ಬಿದಿರಿಗೆ ಮುಂದಿನ ಬೇಸಿಗೆ ದಿನಗಳಲ್ಲಿ ಬೆಂಕಿ ಬಿದ್ದು, ಅರಣ್ಯಕ್ಕೆ ಅಪಾಯವಾಗದಂತೆ ತಡೆಯಲು ಕೈಗೊಂಡಿರುವ ಕಾರ್ಯಗಳ ವಿವರ ಈ ಕೆಳಗಿನಂತಿದೆ:<br>1. ಬೆಂಕಿ ರೇಖೆ ನಿರ್ಮಾಣ 112.52 ಕಿ.ಮೀ.<br>2. ಬೆಂಕಿ ರೇಖೆ ನಿರ್ವಹಣೆ 988.57 ಕಿ.ಮೀ.<br>3. ಬೆಂಕಿ ಕಾವಲುಗಾರರ ನೇಮಕ 180 ಸಂಖ್ಯೆ.<br>4. ಬೆಂಕಿ ನಂದಿಸಲು ಖರೀದಿಸಿದ ಸಾಮಗ್ರಿ:<br>ಬ್ಲೋವೇರ್ – 10 ಸಂಖ್ಯೆ<br>ಚೈನ್-ಸಾ – 05 ಸಂಖ್ಯೆ<br>ಹ್ಯಾಂಡ್ ಸ್ಪ್ರೇಯರ್ – 10 ಸಂಖ್ಯೆ<br>ಬ್ರಷ್ ಕಟರ್ – 05 ಸಂಖ್ಯೆ<br>5. ಕರ್ನಾಟಕ ಅಗ್ನಿಶಾಮಕದಳದ 4 ವಾಹನಗಳು ಮತ್ತು 16 ಸಿಬ್ಬಂದಿಗಳ ನಿಯೋಜನೆ.<br>6. ಬೆಂಕಿ ನಂದಿಸಲು ಹೆಚ್ಚುವರಿಯಾಗಿ 5 ವಾಹನಗಳನ್ನು ಬಾಡಿಗೆಗೆ ಪಡೆಯಲಾಗಿದೆ. |

| | | |
|---|---|---|
| | | ಅಲ್ಲದೆ, ಅರಣ್ಯ ಪ್ರದೇಶಗಳಲ್ಲಿ ಉಂಟಾಗುವ ಕಾಡ್ಗಿಚ್ಚು ತಡೆಯುವ ನಿಟ್ಟಿನಲ್ಲಿ "ಬೆಂಕಿ ಅಧ್ಯಯನ ವಿಶ್ಲೇಷಣೆ ಮತ್ತು ಉಸ್ತುವಾರಿ ಕೋಶ" ವನ್ನು ಅರಣ್ಯ ಇಲಾಖೆಯ ಸಹಯೋಗದೊಂದಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದಲ್ಲಿ ಸ್ಥಾಪಿಸಲಾಗಿರುತ್ತದೆ.<br><br>ಸದರಿ ದೂರ ಸಂವೇದಿ ಅನ್ವಯಿಕ ಕೇಂದ್ರವು ಅರಣ್ಯ ಪ್ರದೇಶದಲ್ಲಿ ಉಂಟಾಗುವ ಕಾಡ್ಗಿಚ್ಚು ಪ್ರದೇಶಗಳನ್ನು ಸೆಟಲೈಟ್ ಮುಖಾಂತರ ಗುರುತಿಸಿ ಸಂಬಂಧಪಟ್ಟ ಅಧಿಕಾರಿಗಳಿಗೆ ಮೊಬೈಲ್ ಆ್ಯಪ್ ಮುಖಾಂತರ ನಿರ್ದಿಷ್ಟ ಸ್ಥಳದ ವಿವರವನ್ನು ತಕ್ಷಣ ಒದಗಿಸುತ್ತಿದ್ದು, ಅದರಂತೆ ಅಧಿಕಾರಿಗಳು ಕಾರ್ಯಪ್ರವೃತ್ತರಾಗಿ ಕಾಡ್ಗಿಚ್ಚು ನಿಯಂತ್ರಣ ಕಾರ್ಯಗಳನ್ನು ಕೈಗೊಳ್ಳುತ್ತಿರುತ್ತಾರೆ. |

ಸಂಖ್ಯೆ: ಅಪಜೀ 34 ಎಫ್‌ಟಿಎಸ್ 2021

**(ಅರವಿಂದ ಲಿಂಬಾವಳಿ)**
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು